KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮೇ ೬, ೨೦೧೦ (ವೈಶಾಖ ೧೬, ಶಕ ವರ್ಷ ೧೯೩೨) | ಸಂಚಿಕೆ ೧೮ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 135 ಇಅತ 2009, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2010.**

ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 69 ಎಸ್‌ಎಸ್‌ಎಂ 2009, ದಿನಾಂಕ 31–10–2009ರಲ್ಲಿ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ನೀಡಿರುವ ಸಹಮತಿಯನ್ವಯ, ಶ್ರೀ ಎ.ಎಂ. ಸಾವಳಗಿ, ಉಪ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಪ್ರಸ್ತುತ ಯೋಜನಾ ಅಂದಾಜು ಮತ್ತು ಮೌಲ್ಯಮಾಪನಾಧಿಕಾರಿ, ವೇತನ ಶ್ರೇಣಿ ರೂ.11400–21600, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರನ್ನು ಈ ಮೂಲಕ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ಪ್ರಾಂಶುಪಾಲರು, ಜಿಲ್ಲಾ ತರಬೇತಿ ಸಂಸ್ಥೆ, ಬಿಜಾಪುರ ಇಲ್ಲಿ ಖಾಲಿ ಇರುವ ಹುದ್ದೆಗೆ ನಿಯೋಜನೆ ಮೇಲೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಹಾಗೂ ಅವರ ಹೆಸರಿನಲ್ಲಿ
**ಅಬ್ದುಲ್ ರಹಮಾನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು–ತರಬೇತಿ)

**ಪಿ.ಆರ್. 562**

**ತಿದ್ದೋಲೆ**

**ಸಂಖ್ಯೆ: ಸಿಆಸುಇ 18, ಸೇಉನ್ಯಾ 2010, ಬೆಂಗಳೂರು, ದಿನಾಂಕ: 9ನೇ ಏಪ್ರಿಲ್ 2010.**

ಜಿಲ್ಲಾ ನ್ಯಾಯಾಧೀಶರ ನೇಮಕಾತಿಗೆ ಸಂಬಂಧಪಟ್ಟ ಅಧಿಸೂಚನೆ ಸಂಖ್ಯೆ ಸಿಆಸುಇ 18 ಸೇಉನ್ಯಾ 2010, ದಿನಾಂಕ 25–3–2010ರಲ್ಲಿನ ಒಕ್ಕಣೆಯನ್ನು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

"ಅಧ್ಯಕ್ಷಾಧಿಕಾರಿ, ಶೀಘ್ರಗತಿ ನ್ಯಾಯಾಲಯ, ಚಿಕ್ಕಮಗಳೂರು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 66ರನ್ವಯ ಅಧ್ಯಕ್ಷಾಧಿಕಾರಿ, ಕಾರ್ಮಿಕ ನ್ಯಾಯಾಲಯ, ಚಿಕ್ಕಮಗಳೂರು ಈ ಖಾಲಿ ಹುದ್ದೆಯಲ್ಲಿ ಸಮವರ್ತಿ ಪ್ರಭಾರದಲ್ಲಿಡಲಾಗಿದೆ"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಪಿ.ಆರ್. 563**

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 82 SAS 2010, Bangalore, Dated 9th April, 2010**

**Sri C.K. Shivanna, IFS (KN 85),** Managing Director, Mysore Sugar Company Limited, Bangalore is transferred with immediate effect.

**Sri Chakravarthi Mohan, IAS (KN 99),** Deputy Commissioner, Chamarajanagara District is placed in additional charge of the post of Managing Director, Mysore Sugar Company Limited, Bangalore with immediate effect & until further orders.

By Order and in the name of the Governor of Karnataka,
**K.G. ANANTHA,**
Under Secretary to Government,
**PR. 564** Department of Personnel and Administrative Reforms (Services-I)

**NOTIFICATION**

**No.DPAR 71 SPS 2010, Bangalore, Dated 9th April, 2010**

Shri Ravindra Prasad, IPS (KN-98), Superintendent of Police, Chikkaballapur District, Chikkaballapur is transferred with immediate effect and posted as Commandant 1st Batallian, KSRP, Bangalore, untill further orders vice Dr. Pawar T.D, IPS, transferred.

Shri. M.N. Nagaraj, IPS (KN-2003), Superintendent of Police, Chikkamagalur District, Chikkamagalur is transferred with immediate effect and posted as Superintendent of Police, Bellary District, Bellary, until further orders vice Shri. Seemant Kumar Singh, IPS, transferred.

Shri. Vikash Kumar Vikash, IPS (KN-2004), Superintendent of Police, Internal Security Division, Bangalore under orders of transfer as Superintendent of Police, Mysore District, Mysore is posted as superintendent of Police, Chikkamagalur District, Chikkamagalur with immediate effect and until further orders vice Shri. M.N. Nagaraj, IPS transferred. The orders posting him as Superintendent of police, Mysore District, Mysore vide Notification No. DPAR 40 SPS 2010 dated: 26-02-2010 stands cancelled.

Dr. Pawar T.D, IPS, Commandant 1st Batallian KSRP, Bangalore, is transferred with immediate effect and posted as Superintendent of Police, Chickkaballapur District, Chikkaballapur, until further orders vice Shri. Ravindra Prasad, IPS, transferred.

By Order and in the name of the Governor of Karnataka,
**ASHOK P.ATRE,**
Under Secretary to Government,
**PR. 565** Department of Personnel and Administrative Reforms (Services-IV)

**NOTIFICATION**

**No.DPAR 13 SFP 2010, Bangalore, Dated 01st April, 2010**

***The orders posting Sri. T. Heeralal, IFS (KN-2002), Deputy Conservator of Forests, Territorial Division, Davanagere as Deputy Conservator of Forests, Sagar Division, Sagar vide Notification*** No:DPAR 221 SFP 2009, dated 23-11-2009 are cancelled and he is continued as Deputy Conservator of Forests, Territorial Division, Davanagere until further orders.

By Order and in the name of the Governor of Karnataka,
**ASHOK P.ATRE,**
Under Secretary to Government,
**PR. 566** Department of Personnel and Administrative Reforms (Services-IV)

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಎನ್ 46 ಸಮನ್ವಯ 2010, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2010.**

ಶ್ರೀ ಸಿ.ಎಸ್. ಗಣೇಶ್, ನಿರ್ದೇಶಕರು (ತಾಂತ್ರಿಕ), ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಶ್ರೀ ಎನ್. ಲಕ್ಷ್ಮಣ, ಹೆಚ್ಚುವರಿ ನಿರ್ದೇಶಕರು (ಯೋಜನೆಗಳು), ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್, ಬೆಂಗಳೂರು ಇವರ ಸ್ಥಳಕ್ಕೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 567**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 9 ಮುನೋಸೇ (1) 2010, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2010.**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿಗಳನ್ನು 2010ನೇ ಸಾಲಿನಲ್ಲಿ (ದಿನಾಂಕ 01–01–2010 ರಿಂದ 31–12–2010ರವರೆಗೆ) ಅವರ ಹೆಸರಿನ ಮುಂದೆ ನಮೂದಿಸಿರುವ ದಿನಾಂಕದಿಂದ ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಲು ಈ ಕೆಳಕಂಡ ಗ್ರೂಪ್ 'ಎ' ಮತ್ತು 'ಬಿ' ಅಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 96(2)ರ ಪ್ರಕಾರ ಸರ್ಕಾರದ ಅನುಮತಿ ನೀಡಿದೆ.

ಸದರಿಯವರುಗಳ ವಿರುದ್ಧ ಯಾವುದೇ ರೀತಿಯ ಇಲಾಖಾ ವಿಚಾರಣೆ, ಲೋಕಾಯುಕ್ತ ವಿಚಾರಣೆ, ಕ್ರಿಮಿನಲ್ ಪ್ರಕರಣ, ಆಡಿಟ್ ಪ್ಯಾರಾ, ಲೆಕ್ಕ ಪರಿಶೋಧನಾ ವರದಿ ಬಾಕಿ ಇದ್ದಲ್ಲಿ ಇವರುಗಳೇ ಪೂರ್ಣ ಜವಾಬ್ದಾರರೆಂದು ಹಾಗೂ ಇವರುಗಳಿಗೆ ತಾತ್ಕಾಲಿಕ ಪಿಂಚಣಿ ಬಿಡುಗಡೆ ಮಾಡುವಂತೆ ಆದೇಶಿಸಲಾಗಿದೆ.

| ಕ್ರ. ಸಂ. | ಅಧಿಕಾರಿ/ನೌಕರರ ಹೆಸರು | ಕೆಲಸ ನಿರ್ವಹಿಸುತ್ತಿರುವ ಕಛೇರಿ | ಜಿಲ್ಲೆ | ಜನ್ಮ ದಿನಾಂಕ | ವಯೋನಿವೃತ್ತಿ ಹೊಂದುವ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| | **ಜಿಲ್ಲಾ ನೋಂದಣಾಧಿಕಾರಿಗಳು (ಗ್ರೂಪ್ 'ಎ')** | | | | |
| 1 | ಶ್ರೀ ಬಿ.ಎಲ್.ಎಂ. ರಾಜು | ಜಿಲ್ಲಾ ನೋಂದಣಿ ಕಛೇರಿ, ಹಾಸನ | ಹಾಸನ | 23–11–1950 | 30–11–2010 |
| 2 | ಶ್ರೀ ಹೆಚ್. ಗುಜ್ಜಾರಪ್ಪ | ಜಿಲ್ಲಾ ನೋಂದಣಿ ಕಛೇರಿ, ಬಳ್ಳಾರಿ | ಬಳ್ಳಾರಿ | 06–12–1950 | 31–12–2010 |
| | **ಹಿರಿಯ ಉಪನೋಂದಣಾಧಿಕಾರಿಗಳು (ಗ್ರೂಪ್ 'ಬಿ')** | | | | |
| 1 | ಶ್ರೀ ಬಿ. ನಂದಗೋಪಾಲ್ | ಉಪ ನೋಂದಣಿ ಕಛೇರಿ, ಕುಣಿಗಲ್ | ತುಮಕೂರು | 15–08–1950 | 30–08–2010 |
| 2 | ಶ್ರೀ ಕೆ. ತಿಮ್ಮಣ್ಣಾಚಾರ್ | ಉಪ ನೋಂದಣಿ ಕಛೇರಿ, ಯಾದಗಿರಿ | ಗುಲ್ಬರ್ಗಾ | 10–08–1950 | 31–08–2010 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಕೆ. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಪಿ.ಆರ್. 568**

## ಅಧಿಸೂಚನೆ

**ಸಂಖ್ಯೆ: ಆರ್‌ಡಿ 110 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 5ನೇ ಏಪ್ರಿಲ್ 2010.**

ಶ್ರೀ ಹೆಚ್. ಪಿ. ನಾಗರಾಜ್, ತಹಶೀಲ್ದಾರ್ ಗ್ರೇಡ್–II ಇವರಿಗಿಂತ ಜ್ಯೇಷ್ಠತೆಯಲ್ಲಿ ಕಿರಿಯರಾದ ಶ್ರೀ ಬಸವನಗೌಡ, ಬಿ. (ಎಸ್.ಟಿ.) ಇವರಿಗೆ ತಹಶೀಲ್ದಾರ್ ಗ್ರೇಡ್–I ವೃಂದಕ್ಕೆ ಸರ್ಕಾರದ ಅಧಿಸೂಚನೆ ಸಂ: ಆರ್‌ಡಿ 308 ಎಎಸ್‌ಡಿ 2007, ದಿನಾಂಕ 24–12–2007ರಲ್ಲಿ ಬಡ್ತಿ ನೀಡಿರುವುದರಿಂದ, ಶ್ರೀ ಹೆಚ್.ಪಿ. ನಾಗರಾಜ್, ತಹಶೀಲ್ದಾರ್ ಇವರಿಗೂ ಕೂಡ ವೇತನ ಶ್ರೇಣಿ ರೂ. 14,050–25,050ರಲ್ಲಿ ತಹಶೀಲ್ದಾರ್ ಗ್ರೇಡ್–I ವೃಂದಕ್ಕೆ ದಿನಾಂಕ 24–12–2007ರಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್. (ಆರ್.ಪಿ.ಪಿ.ಪಿ.) ನಿಯಮಾವಳಿ 1978ರ ನಿಯಮ 2(1) (ಎ)ರಡಿಯಲ್ಲಿ ಪೂರ್ವಾನ್ವಯವಾಗಿ ಬಡ್ತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ.ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 569**

## ಇಂಧನ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಇಎನ್ 38 ಸಮನ್ವಯ 2010, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2010.**

ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಪ್ರದೀಪ್. ಎಸ್. ರಾಜನಾಳ್, ಸರ್ಕಾರದ ಜಂಟಿ ಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ ಇವರನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ (ಶ್ರೀ ಕೆ.ಎಸ್. ಪ್ರಭಾಕರ್, ಭಾ.ಆ.ಸೇ., ಇವರ ಸ್ಥಳದಲ್ಲಿ) ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 570**

## ಒಳಾಡಳಿತ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಒಇ 456 ಪಿಪಿಇ 2009 ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2010.**

ಶ್ರೀ ಎಸ್.ಡಿ. ಕೆಮ್ಮನಕೇರಿ, ಅಭಿಯೋಗ ಉಪ ನಿರ್ದೇಶಕರು, ದಾವಣಗೆರೆ ವಿಭಾಗ, ದಾವಣಗೆರೆ ಹಾಗೂ ಶ್ರೀ ಪೂಜಾರಿ ರುದ್ರಪ್ಪ, ಸರ್ಕಾರಿ ಅಭಿಯೋಜಕರು, 10ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಇವರನ್ನು ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಪರಸ್ಪರ ವರ್ಗಾಯಿಸಲಾಗಿದೆ. ಮುಂದುವರೆದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 288 ಪಿಪಿಇ 2009 ದಿನಾಂಕ: 16–10–2009ರ ಕ್ರ.ಸಂ.(2)ರಲ್ಲಿ ಶ್ರೀ ಬಿ.ಆರ್. ಕುಲಕರ್ಣಿ, 7ನೇ ಅಪರ ಸರ್ಕಾರಿ ಅಭಿಯೋಜಕರು, 12ನೇ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಇವರ ವರ್ಗಾವಣೆಯನ್ನು ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತು ಅಭಿಯೋಗಗಳು)

**ಪಿ.ಆರ್. 571**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 24 ಎಟಿಎಸ್ 2010, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2010.**

ಕಂದಾಯ ಇಲಾಖೆಯ ತಹಶೀಲ್ದಾರರ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ತಹಶೀಲ್ದಾರರುಗಳನ್ನು ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಸ್ಥಳಗಳಿಗೆ ಸಾರ್ವಜನಿಕ ಹಾಗೂ ಆಡಳಿತ ಹಿತದೃಷ್ಟಿಯಿಂದ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

| ಕ್ರ.ಸಂ. | ತಹಶೀಲ್ದಾರರ ಹೆಸರು ಹಾಗೂ ಹಾಲಿ ಕಾರ್ಯನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾಯಿಸಿದ ಸ್ಥಳ |
|---|---|---|
| 1 | ಶ್ರೀ ಬಿ. ಸಂಪತ್‌ಕುಮಾರ್, ತಹಶೀಲ್ದಾರ್, ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವವರು | ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ – ಶ್ರೀಮತಿ ಜಿ. ರಶ್ಮಿ, ಇವರ ಜಾಗಕ್ಕೆ |
| 2 | ಜಿ. ರಶ್ಮಿ, ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇಲ್ಲಿನ ಖಾಲಿ ಹುದ್ದೆಗೆ |

ಮೇಲ್ಕಂಡ ತಹಶೀಲ್ದಾರರುಗಳನ್ನು ವರ್ಗಾವಣೆ ಆಗಿರುವ ಸ್ಥಳಕ್ಕೆ ಹಾಜರಾಗುವಂತೆ ಸೂಚಿಸಿ ತಕ್ಷಣದಿಂದ ಬಿಡುಗಡೆಗೊಳಿಸುವಂತೆ ನಿಯಂತ್ರಣಾಧಿಕಾರಿಗಳಿಗೆ ಸೂಚಿಸಿದೆ. ಬಿಡುಗಡೆಗೊಂಡ ತಹಶೀಲ್ದಾರರುಗಳು ನೇಮಕಾತಿ ಮಾಡಿದ ಸ್ಥಳಗಳಲ್ಲಿ ಕೂಡಲೇ ಕರ್ತವ್ಯಕ್ಕೆ ಹಾಜರಾಗಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ **(ಸೇವೆಗಳು–3)**

**ಪಿ.ಆರ್. 572**

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 252 SAS 2010, Bangalore, Dated 16th April, 2010**

**Sri Gokul Ram, IAS (KN 74)** waiting for posting is appointed with immediate effect and until further orders as as Chairman, Karnataka Rural Infrastructure Development Corporation Limited (formerly Karnataka Land Army Corporation Limited) in the existing vacancy.

Government hereby declare u/r 9 of IAS (pay) Rules, 2007 that the post of Chairman, Karnataka Land Army Corporation, in the Apex Scale of IAS is equivalent in status and responsibilities to the Cadre post of Additional Chief Secretary to Government included in the Schedule II to the said Rules.

Smt. G. Kalpana, IAS (KN 91) waiting for posting is posted with immediate effect and until further orders as as Commissioner, Survey Settlement and Land Records in the existing vacancy relieving Sri K.S. Prabhakara, IAS of additional charge.

By Order and in the name of the Governor of Karnataka
**K.G. ANANTHA**
Under Secretary to Government
Department of Personnel and Administrative Reforms (Services-I)

**P. R. 573**

### NOTIFICATION

**No. DPAR 251 SAS 2010, Bangalore, Dated 16th April, 2010**

On return from Central Deputation, **Sri G.V. Krishna Rau, IAS (KN 82)** is posted as Secretray to Governor of Karnataka until further orders vice Smt. Sharada Subramanyam, IA & AS repatriated to parent cadre.

The cadre post of Secretary to Governor of Karnataka has been upgraded to IAS, HAG level carrying the Pay Scale of Rs. 67000-79000 till the cadre post is revived.

Further, Government hereby declare u/r 9 of IAS (Pay) Rules, 2007 that the post of Secretary to Governor of Karnataka, in the HAG Scale of IAS is equivalent in status and responsibilities to the Cadre post of Chief Electoral Officer & E/O Principal Secretary to Government, DA & AR (Elections) included in the Schedule II to the said Rules.

By Order and in the name of the Governor of Karnataka
**K.G. ANANTHA**
Under Secretary to Government
**P. R. 575** Department of Personnel and Administrative Reforms (Services-I)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 29 ಸೇಇಮು 2010, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2010.**

ಶ್ರೀ ಎಸ್.ಎಸ್. ಖನಗಾವಿ, ಮುಖ್ಯ ಇಂಜಿನಿಯರ್, ಬಾಗಲಕೋಟೆ ನಗರಾಭಿವೃದ್ಧಿ ಪ್ರಾಧಿಕಾರ, ಬಾಗಲಕೋಟೆ ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕಂದಾಯ ಇಲಾಖೆಯಿಂದ ಹಿಂದಕ್ಕೆ ಪಡೆದು ಮುಖ್ಯ ಇಂಜಿನಿಯರ್ (ಸಂಪರ್ಕ ಮತ್ತು ಕಟ್ಟಡಗಳು), ಲೋಕೋಪಯೋಗಿ ಇಲಾಖೆ (ಉತ್ತರ), ಧಾರವಾಡ – ಶ್ರೀ ಮಹೇಶ್ ಎಂ. ಹಿರೇಮಠ್ ಇವರ ಸ್ಥಾನದಲ್ಲಿ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
**ಪಿ.ಆರ್. 574** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 25 ಎಟಿಎಸ್ 2010, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2010.**

ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 100 ಎಟಿಎಸ್ 2010 ದಿನಾಂಕ 08–04–2010ರಂದು ಹೊರಡಿಸಿದ ವರ್ಗಾವಣೆ ಆದೇಶಕ್ಕೆ ಈ ಕೆಳಕಂಡಂತೆ ಮಾರ್ಪಾಡು ಮಾಡಿ ಈ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

| ಕ್ರ.ಸಂ. | ತಹಶೀಲ್ದಾರರ ಹೆಸರು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾಯಿಸಿದ ಸ್ಥಳ |
|---|---|---|
| 1 | ವರಪ್ರಸಾದ ರೆಡ್ಡಿ ಬಿ.ಎನ್. ತಹಶೀಲ್ದಾರ್, ಹಾಸನ ತಾಲ್ಲೂಕು ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವವರು | ಇವರ ವರ್ಗಾವಣೆಯನ್ನು ರದ್ದುಪಡಿಸಿ, ಇವರನ್ನು ತಹಶೀಲ್ದಾರ್, ಚನ್ನರಾಯಪಟ್ಟಣ, ಹಾಸನ ಜಿಲ್ಲೆ, ಇಲ್ಲಿಯೇ ಮುಂದುವರೆಸಿದೆ |
| 2 | ನಾಗರಾಜ್, ತಹಶೀಲ್ದಾರ್, ಚನ್ನರಾಯಪಟ್ಟಣ, ಹಾಸನ ಜಿಲ್ಲೆ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವವರು | ಇವರ ವರ್ಗಾವಣೆಯನ್ನು ರದ್ದುಪಡಿಸಿ, ಇವರನ್ನು ತಹಶೀಲ್ದಾರ್, ಹಾಸನ ತಾಲ್ಲೂಕು, ಹಾಸನ ಜಿಲ್ಲೆ, ಇಲ್ಲಿಗೆ ನೇಮಿಸಿದೆ |
| 3 | ಎಂ.ಕೆ. ಪ್ರಮೀಳ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಯವರ ಕಛೇರಿ, ಹಾಸನ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವವರು | ಇವರ ವರ್ಗಾವಣೆಯನ್ನು ರದ್ದುಪಡಿಸಿ, ಇವರನ್ನು ತಹಶೀಲ್ದಾರ್ ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿನ ಹುದ್ದೆಗೆ ನೇಮಿಸಿದೆ |
| 4 | ಅರುಣಪ್ರಭಾ, ತಹಶೀಲ್ದಾರ್, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವವರು | ಇವರ ವರ್ಗಾವಣೆಯನ್ನು ರದ್ದುಪಡಿಸಿ, ಇವರನ್ನು ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರದುರ್ಗ ಇಲ್ಲಿಯೇ ಮುಂದುವರಿಸಿದೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ದೇಸಾಯಿ**
ಸರ್ಕಾರದ ಉಪಕಾರ್ಯದರ್ಶಿ
**ಪಿ.ಆರ್. 576** ಕಂದಾಯ ಇಲಾಖೆ (**ಸೇವೆಗಳು ಮತ್ತು ವಿಪತ್ತು ನಿರ್ವಹಣೆ**)

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 01 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2010.**

ಶ್ರೀ ಎಂ.ಎಸ್. ಸುರೇಶ್, ಶಿರಸ್ತೇದಾರ್, ಸಹಾಯಕ ಆಯುಕ್ತರ ಕಛೇರಿ, ಯಾದಗೀರ್ ವಿಭಾಗ, ಯಾದಗೀರ್ ಜಿಲ್ಲೆ ಇವರಿಗೆ ಸರ್ಕಾರದ ಅಧಿಸೂಚನೆ ಸಂ. ಆರ್‌ಡಿ 01 ಎಎಸ್‌ಡಿ 2008, ದಿನಾಂಕ : 01-09-2009ರಲ್ಲಿ ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ದಿನಾಂಕ : 24-09-1997ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿ) ನಿಯಮಾವಳಿಗಳು 1978ರ ನಿಯಮ 2(1)(ಎ)ರಡಿಯಲ್ಲಿ ಪೂರ್ವಾನ್ವಯವಾಗಿ ಬಡ್ತಿ ನೀಡಿ ಆದೇಶಿಸಲಾಗಿದೆ. ಸದರಿಯವರಿಗೆ ಸರ್ಕಾರದ ಅಧಿಸೂಚನೆ ಸಂ : ಆರ್‌ಡಿ 515 ಎಎಸ್‌ಡಿ 2009, ದಿನಾಂಕ 21-11-2009ರಲ್ಲಿ ತಹಶೀಲ್ದಾರ್, ಗೇಲ್ (ಇಂಡಿಯಾ) ಲಿಮಿಟೆಡ್, ಬೆಂಗಳೂರು-ಕ್ಯಾಂಪ್ ಇಲ್ಲಿಗೆ ವರ್ಗಾಯಿಸಿದ್ದು, ಸದರಿ ಹುದ್ದೆಯು ಇಲಾಖೆಯೇತರ ಹುದ್ದೆಯಾಗಿರುವುದರಿಂದ ಅವರಿಗೆ ನೀಡಿರುವ ಮುಂಬಡ್ತಿಯನ್ನು ಕೆ.ಸಿ.ಎಸ್.ಆರ್. ನಿಯಮ 60ರಡಿಯಲ್ಲಿ ಪ್ರೊಫಾರ್ಮ ಬಡ್ತಿ ಸಕ್ರಮಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ **(ಸೇವೆಗಳು-3)**

**ಪಿ.ಆರ್. 577**

**ಅಧಿಸೂಚನೆ**

**ಸಂಖ್ಯೆ : ಕಂಇ 100 ಎಟಿಎಸ್ 2010, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2010.**

ಹುನಗುಂದ ತಹಶೀಲ್ದಾರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ, ಶ್ರೀಮತಿ ರಾಜಶ್ರೀ ಜೈನಾಪುರ ಇವರನ್ನು ವಿಶೇಷ ತಹಶೀಲ್ದಾರ್, ಬಬಲೇಶ್ವರ, ಬಿಜಾಪುರ ಜಿಲ್ಲೆ, ಇಲ್ಲಿಗೆ ದಿನಾಂಕ : 06-02-2010ರಂದು ವರ್ಗಾಯಿಸಿರುವ ಬಗ್ಗೆ ಸದರಿ ಅಧಿಕಾರಿಯು ಸಲ್ಲಿಸಿದ ಪುನರ್ ಪರಿಶೀಲನಾ ಅರ್ಜಿಯನ್ನು ಪರಿಶೀಲಿಸಿ ಸೂಕ್ತ ಆದೇಶ ಮಾಡುವಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ : 09-02-2010ರಂದು ನೀಡಿದ ನಿರ್ದೇಶನದಂತೆ ದಿನಾಂಕ : 08-04-2010ರಂದು ತಹಶೀಲ್ದಾರ್ ವೃಂದದ ವೃಂದ ನಿರ್ವಹಣಾ ಪ್ರಾಧಿಕಾರ ಸಭೆ ನಡೆಸಲಾಯಿತು. ಈಗಾಗಲೇ ದಿನಾಂಕ: 25-1-2010ರಂದು ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯಲ್ಲಿ ಶ್ರೀಮತಿ ರಾಜಶ್ರೀ ಜೈನಾಪುರ, ಹುನಗುಂದ ತಹಶೀಲ್ದಾರ್, ಇವರನ್ನು ಆಡಳಿತ ಹಿತದೃಷ್ಟಿಯಿಂದ ವಿಶೇಷ ತಹಶೀಲ್ದಾರ್, ಬಬಲೇಶ್ವರ, ಬಿಜಾಪುರ ಜಿಲ್ಲೆ, ಇಲ್ಲಿಗೆ ವರ್ಗಾಯಿಸಿ ಅವರ ಸ್ಥಳಕ್ಕೆ ಶ್ರೀ ಹೆಚ್.ಎನ್. ನಾಗರಾಜ್, ತಹಶೀಲ್ದಾರ್, ಚಿಂತಾಮಣಿ, ಇವರನ್ನು ವರ್ಗಾಯಿಸಲು ತೀರ್ಮಾನ ಕೈಗೊಳ್ಳಲಾಗಿದೆ. ಇದು ಆಡಳಿತ ಹಿತದೃಷ್ಟಿಯಿಂದ ಆಗಿರುವ ವರ್ಗಾವಣೆ ಆಗಿರುವುದರಿಂದ ಶ್ರೀಮತಿ ರಾಜಶ್ರೀ ಜೈನಾಪುರ ಇವರನ್ನು ಹುನಗುಂದ ತಹಶೀಲ್ದಾರ್ ಹುದ್ದೆಯಲ್ಲಿ ಮುಂದುವರೆಸಲು ಸಾಧ್ಯವಿಲ್ಲವೆಂದು ತೀರ್ಮಾನಿಸಿ ಈಗಾಗಲೇ ದಿನಾಂಕ : 06-02-2010ರಂದು ಮಾಡಿದ ವರ್ಗಾವಣೆ ಆದೇಶವನ್ನು ಜಾರಿಗೊಳಿಸಲು ತೀರ್ಮಾನಿಸಲಾಯಿತು. ಅದರಂತೆ, ಶ್ರೀಮತಿ ರಾಜಶ್ರೀ ಜೈನಾಪುರ, ಇವರು ವಿಶೇಷ ತಹಶೀಲ್ದಾರ್, ಬಬಲೇಶ್ವರ, ಇಲ್ಲಿನ ಹುದ್ದೆಗೆ ಹಾಗೂ ಶ್ರೀ ಹೆಚ್.ಎನ್. ನಾಗರಾಜ್, ಇವರು ತಹಶೀಲ್ದಾರ್, ಹುನಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಇಲ್ಲಿನ ಹುದ್ದೆಗೆ ಈ ಕೂಡಲೇ ಕಾರ್ಯವರದಿ ಮಾಡಿಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ **(ಸೇವೆಗಳು-3)**

**ಪಿ.ಆರ್. 578**

**ಅಧಿಸೂಚನೆ**

**ಸಂಖ್ಯೆ: ಕಂಇ 25 ಎಟಿಎಸ್ 2010, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2010.**

ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 100 ಎಟಿಎಸ್ 2010 ದಿನಾಂಕ 08-04-2010ರಲ್ಲಿ ಶ್ರೀ ಎಂ.ಎಸ್. ರಮೇಶ್, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ, ಇವರನ್ನು ಹೆಚ್.ಡಿ. ಕೋಟೆ ತಹಶೀಲ್ದಾರರನ್ನಾಗಿ ವರ್ಗಾಯಿಸಿರುವುದನ್ನು ರದ್ದುಪಡಿಸಿದೆ ಹಾಗೂ ಶ್ರೀರಂಗಪಟ್ಟಣ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಎನ್.ಸಿ. ಜಗದೀಶ್, ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಹಿಂದಿರುಗಿಸಿರುವುದನ್ನು ಹಿಂತೆಗೆದುಕೊಂಡು ಇವರನ್ನು ಹೆಚ್.ಡಿ. ಕೋಟೆ ತಾಲ್ಲೂಕು,

ಮೈಸೂರು ಜಿಲ್ಲೆ, ಇಲ್ಲಿನ ತಹಶೀಲ್ದಾರರ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 100 ಎಟಿಎಸ್ 2010 ದಿನಾಂಕ 08-04-2010ರಲ್ಲಿ ಶ್ರೀ ಜಿ.ಎಲ್. ಬಿ. ಪಾಟೀಲ್, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಬೆಳಗಾವಿ, ಇವರನ್ನು ತಹಶೀಲ್ದಾರ್, ಕುಮಟಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಇಲ್ಲಿಗೆ ವರ್ಗಾಯಿಸಿರುವುದನ್ನು ರದ್ದುಪಡಿಸಿ ಇವರನ್ನು ಹಿಂದಿನ ಹುದ್ದೆಯಲ್ಲೇ ಮುಂದುವರೆಸಿ ಆದೇಶಿಸಿದೆ.

ಶ್ರೀ ಪಿ.ಎನ್. ಕೃಷ್ಣಮೂರ್ತಿ, ತಹಶೀಲ್ದಾರ್, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಇವರು ತಹಶೀಲ್ದಾರ್ ಶ್ರೀನಿವಾಸಪುರ ತಾಲ್ಲೂಕು, ಇಲ್ಲಿಗೆ ವರ್ಗಾವಣೆ ಆದೇಶದಲ್ಲಿದ್ದು, ಇವರ ವರ್ಗಾವಣೆ ಆದೇಶವನ್ನು ಮಾರ್ಪಡಿಸಿ ಇವರನ್ನು ತಹಶೀಲ್ದಾರ್, ಕುಮಟಾ, ಉತ್ತರ ಕನ್ನಡ ಜಿಲ್ಲೆ, ಇಲ್ಲಿನ ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಶ್ರೀಮತಿ ಸರೋಜ ಬಿ.ಬಿ. ಪುರಸಭೆ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ, ಇವರನ್ನು ತಹಶೀಲ್ದಾರ್, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ. ಇಲ್ಲಿ ಶ್ರೀ ಸುಲ್ತಾನ್ ಮೆಹಮೂದ್, ಇವರ ಸ್ಥಳಕ್ಕೆ ಹಾಗೂ ಸುಲ್ತಾನ್ ಮೆಹಮೂದ್, ತಹಶೀಲ್ದಾರ್, ಇವರನ್ನು ಗುಲ್ಬರ್ಗಾ, ಪ್ರಾದೇಶಿಕ ಆಯುಕ್ತರ ಕಛೇರಿ ಶ್ರೀಮತಿ ಎಂ.ಕೆ. ಪ್ರಮೀಳ, ತಹಶೀಲ್ದಾರ್, ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ ವರ್ಗಾಯಿಸಿ ಆದೇಶಿಸಿದೆ.

ವರ್ಗಾಯಿಸಿದ ಅಧಿಕಾರಿಗಳನ್ನು ಈ ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡಿ, ವರ್ಗಾಯಿಸಿದ ಸ್ಥಳದಲ್ಲಿ ಹಾಜರಾಗುವಂತೆ ಜಿಲ್ಲಾಧಿಕಾರಿಗಳು ಸೂಕ್ತ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ದೇಸಾಯಿ**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ (**ಸೇವೆಗಳು ಮತ್ತು ವಿಪತ್ತು ನಿರ್ವಹಣೆ**)

ಪಿ.ಆರ್. 579

## ಅಧಿಸೂಚನೆ

**ಸಂಖ್ಯೆ: ಕಂಇ 100 ಎಟಿಎಸ್ 2010, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2010.**

ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 100 ಎಟಿಎಸ್ 2010 ದಿನಾಂಕ 08-04-2010ರಂದು ಹೊರಡಿಸಿದ ವರ್ಗಾವಣೆ ಆದೇಶಕ್ಕೆ ಈ ಕೆಳಕಂಡಂತೆ ಮಾರ್ಪಾಡು ಮಾಡಿ ಈ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

| ಕ್ರ.ಸಂ. | ತಹಶೀಲ್ದಾರರ ಹೆಸರು ಹಾಗೂ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾಯಿಸಿರುವ ಸ್ಥಳ |
|---|---|---|
| 1 | ಶ್ರೀ ಎಂ.ಎಸ್.ಎನ್. ಬಾಬು, ವಿಶೇಷ ತಹಶೀಲ್ದಾರ್, ಕಡಬ, ದಕ್ಷಿಣ ಕನ್ನಡ ಜಿಲ್ಲೆ | ತಹಶೀಲ್ದಾರ್, ಹೊಸದುರ್ಗ ತಾಲ್ಲೂಕು, ಶ್ರೀ ಸಿ.ಜೆ. ಕೃಷ್ಣಕುಮಾರ್ ಜಾಗಕ್ಕೆ ಮಾಡಿರುವ ಆದೇಶವನ್ನು ಮಾರ್ಪಡಿಸಿ, ಅವರನ್ನು ವಿಶೇಷ ತಹಶೀಲ್ದಾರ್, ಕಡಬ, ದಕ್ಷಿಣ ಕನ್ನಡ ಜಿಲ್ಲೆ, ಇಲ್ಲಿಯೇ ಮುಂದುವರೆಸಿದೆ. |
| 2 | ಶ್ರೀ ಎನ್. ತಿಪ್ಪೇಸ್ವಾಮಿ, ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ತುಮಕೂರು ಜಿಲ್ಲೆ | ತಹಶೀಲ್ದಾರ್, ಹೊಸದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಶ್ರೀ ಸಿ.ಜೆ. ಕೃಷ್ಣಕುಮಾರ್ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ |
| 3 | ಶ್ರೀ ಚಂದ್ರಕಾಂತ್ ಬೇಳೂರ್, ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ | ಇವರನ್ನು ಸುರಪುರ ತಹಶೀಲ್ದಾರ್ ಹುದ್ದೆಗೆ ವರ್ಗಾಯಿಸಿರುವುದನ್ನು ರದ್ದುಗೊಳಿಸಿ, ಹಾಲಿ ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ, ಇಲ್ಲಿಯೇ ಮುಂದುವರೆಸಲಾಗಿದೆ. |
| 4 | ಶ್ರೀ ವೀರೇಶ್ ಬಿರಾದಾರ, ವಿಶೇಷ ತಹಶೀಲ್ದಾರ್, ಹುಣಸಗಿ | ತಹಶೀಲ್ದಾರ್, ಸುರಪುರ ತಾಲ್ಲೂಕು, ಯಾದಗಿರಿ ಜಿಲ್ಲೆ (ಖಾಲಿ ಜಾಗಕ್ಕೆ). |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (**ಸೇವೆಗಳು-3**)

ಪಿ.ಆರ್. 580